ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಗೆ ನಷ್ಟ ಉಂಟಾಗಿರುವ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನ ಸಭೆಯಿಂದ ಚುನಾಯಿತರಾದವರು):-

1574 (1809) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಹಕಾರ ಇಲಾಖೆಯ ಅಧಿಕಾರಿಗಳ ಆಲಸ್ಯದಿಂದ/ನಿರ್ಲಕ್ಷ್ಯದಿಂದ ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಗೆ ರೂ.656.06 ಕೋಟಿ ನಷ್ಟ ಉಂಟಾಗಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ;

(ಆ) ಪೂರೈಕೆ ಏಜೆನ್ಸಿಗಳಿಂದ 1598.90 ಕೋಟಿ ಬಾಕಿ ಇದ್ದು, ಈ ಮೊತ್ತವನ್ನು ಇದುವರೆಗೂ ವಸೂಲು ಮಾಡಲು ಯಾವುದೇ ಕ್ರಮ ಕೈಗೊಳ್ಳದೆ ಪೂರೈಕೆ ಏಜೆನ್ಸಿಯವರೊಂದಿಗೆ ಶಾಮೀಲಾಗಿ ಅವ್ಯವಹಾರ ನಡೆಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪೂರೈಕೆ ಏಜೆನ್ಸಿಗಳಿಂದ ಬಾಕಿ ವಸೂಲಿಗೆ ಕ್ರಮ ಕೈಗೊಳ್ಳದ ಅಧಿಕಾರಿಗಳ ಮೇಲೆ ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಇ) ಕಳೆದ 3 ವರ್ಷಗಳಲ್ಲಿ ಪೂರೈಕೆ ಏಜೆನ್ಸಿಗಳಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಮೊತ್ತವೆ ಷ್ಟು ; ಏಜೆನ್ಸಿಯ ಹೆಸರಿನೊಂದಿಗೆ ಜಿಲ್ಲಾವಾರು ಮಾಹಿತಿ ನೀಡುವುದು ?